MW Wind Power capacity in favour of M/s Kanade Anand Udyog Private Limited at Majjur village, Shirahatti Taluk, Gadag District allotted in the name of M/s Enercon (I) Limited.

The proposal has been examined at the Government level and hence the order :-

**Government Order No: EN 370 NCE 2006, Bangalore, Dated: 25th August 2006**

Government accords for transfer of 1.6 MW Wind Power capacity in favour of M/s Kanade Anand Udyog Private Limited at Majjur village, Shirahatti Taluk, Gadag District allotted in the name of M/s Enercon (I) Limited.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,
**SURESH.B.KRISHNAPPANAVAR**
Under Secretary to Government, Energy Department.

P.R. 1267

**Subject:** Transfer of 0.8 MW Wind Power Capacity in favour of M/s M.K. Agrotech Private Limited-reg.

**Read:**
1) Government Order No: DE 26 NCE 1999 dated: 13.5.1999.
2) Government Order No : EN 319 NCE 2005, dated : 25.10.2005.
3) Letter No : KRED / 08 / MKAIL / 2006 / 1866 dated: 19.8.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (2) above, sanction has been accorded for implementation of 16.00 MW capacity Wind Power Project at Gadag District to M/s Enercon (I) Limited.

Now, the Managing Director, Karnataka Renewable Energy Development Limited, Bangalore, in his letter dated : 19.8.2006 read at (3) above, has recommended to the Government for transfer of 0.8 MW Wind Power capacity in favour of M/s M.K. Agrotech Private Limited at Majjur village, Shirahatti Taluk, Gadag District allotted in the name of M/s Enercon (I) Limited.

The proposal has been examined at the Government level and hence the order:-

**Government Order No: EN 369 NCE 2006, Bangalore, Dated: 25th August 2006**

Government accords for transfer of 0.8 MW Wind Power capacity in favour of M/s M.K. Agrotech Private Limited at Majjur village, Shirahatti Taluk, Gadag District allotted in the name of M/s Enercon (I) Limited.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,
**SURESH.B.KRISHNAPPANAVAR**
Under Secretary to Government, Energy Department.

P.R. 1266

**Subject:** Change of location and enhancement from 37.00 MW to 43.95 Capacity Wind Power Project in favour of M/s Chitradurga Wind Power Private Limited-reg.

**Read:**
1) Government Order No: EN 244 NCE 2002 dated: 5.3.2003.
2) Letter No : KRED / 08 / CWI / 2006 / 1895 dated : 24.8.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (1) above sanction has been accorded for implementation of 37.00 MW capacity Wind Power Project at Chitradurga and Tumkur Districts to M/s Chitradurga Wind Power Private Limited.

Now, the Managing Director, Karnataka Renewable Energy Development Limited, Bangalore, in his letter dated: 24.8.2006 read at (2) above has recommended to the Government for Change of location of 21.00 MW capacity Wind Power Project allotted in favour of M/s Chitradurga Wind Power Private Limited at Hosadurga Town Chitradurga District to Bharamasagar of Davangere District and enhance the capacity from 37.00 MW to 43.95 MW.

The proposal has been examined at the Government level and the order :-

**Government Order No: EN 373 NCE 2006, Bangalore, Dated: 1st September 2006**

Government accords for the change of location and enhancement from 37.00 MW to 43.95 MW capacity Wind Power Project allotted in favour of M/s Chitradurga Wind Power Private Limited at

Hosadurga Town Chitradurga District to Bharamasagar of Davangere District. The details of enhanced capacity and change of location are as shown below :-

| Sl. No. | Sanctioned Capacity and Geographical area vide G.O. No: EN 244 NCE 2002 dated: 5.3.2003. | Transfer of the Capacity and enhancement in MW and Change of Location | Total Capacity at each locations |
|---|---|---|---|
| 1. | 10 MW<br><br>SouthWest of Bharmasagar-Group of Ridges with peaks 802, 852, 860, 800 and 780 M elevation covered in<br>Latitude: 14°17' N- 14°20' N<br>Longitude: 76°5'-76°10' E | 21+10+enhanced capacity 6.95 | 37.95 MW |
| 2. | 6.00 MW<br>North East and South East of Holakere, Group of Ridges covered inbetween<br>Latitude: 14°0' N- 14°5' N<br>Longitude: 76°10'-15' E | No Change | 6.00 MW |
| 3. | 21.00 MW<br>Ridges located in North and South of Hosadurga town with peaks 1097, 982 and 895 M elevation covered in :-<br>Latitude: 13° 45' - 51' N<br>Longitude: 76° 15'- 18' E<br>and East of Mattoda village a ridge of North-South Orientation with peaks 783 and 725 M elevations covered in :-<br>Latitude: 13° 45' - 50' N<br>Longitude: 76° 24'- 26' E | Capacity merged and transfered to Serial No: 1 that is 21.00 MW moved to Bharmasagar | Nil |
| | **Total** | **37.00 MW** | **43.95 MW** |

The terms and conditions of the Government Order read at (1) above shall **IPSOFACTO** applicable.

By Order and in the name of the Governor of Karnataka,
**SURESH.B.KRISHNAPPANAVAR**
Under Secretary to Government, Energy Department.

P.R. 1313

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಚಿತ್ರದುರ್ಗದ ಬಸವೇಶ್ವರ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ ಇವರಿಗೆ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಇಎಸ್(2)/60/2005-06, ದಿನಾಂಕ 31-08-2005.

2) ಪ್ರಾಂಶುಪಾಲರು, ಬಸವೇಶ್ವರ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ, ಚಿತ್ರದುರ್ಗ ಇವರ ಪತ್ರ ದಿನಾಂಕ 22-06-2006.

**ಪ್ರಸ್ತಾವನೆ:**

1) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಚಿತ್ರದುರ್ಗದ ಬಸವೇಶ್ವರ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆಯ ಪ್ರಾಂಶುಪಾಲರು ಅವರ ಕಾಲೇಜಿನ ಆಸ್ಪತ್ರೆಗೆ ಮರಣೋತ್ತರ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ವಿಧಿವೈದ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥರಿಂದ ಚಿತ್ರದುರ್ಗದ ಬಸವೇಶ್ವರ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆಯ ತಪಾಸಣೆ ನಡೆಸಿ, ಶವ ಪರೀಕ್ಷೆ ಅಧ್ಯಯನ ಮಾಡಲು ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ತರಬೇತಿ ನೀಡಲು ವಿದ್ಯಾಲಯವು ಸಾಕಷ್ಟು ಪ್ರಮಾಣದಲ್ಲಿ ಮೂಲಭೂತ ಸೌಕರ್ಯಗಳು ಹೊಂದಿರುವುದಾಗಿ ವರದಿಯಲ್ಲಿ ತಿಳಿಸಿರುತ್ತಾರೆ.

2) ಮೇಲ್ಕಂಡ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಮೇಲ್ಕಂಡ ವೈದ್ಯಕೀಯ ಕಾಲೇಜಿನ ಆಸ್ಪತ್ರೆಗೆ ಸದರಿ ಆಸ್ಪತ್ರೆಯಲ್ಲಿ ಮರಣದಿಂದ ಉಂಟಾಗುವ ಶವಗಳ ಮರಣೋತ್ತರ ಪರೀಕ್ಷೆಯನ್ನು ನಡೆಸಲು ಅನುಮತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 6 ಎಂಪಿಎಸ್ 2006 (ಭಾ), ಬೆಂಗಳೂರು, ದಿನಾಂಕ 28ನೇ ಜುಲೈ 2006**

3) ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ಚಿತ್ರದುರ್ಗದ ಬಸವೇಶ್ವರ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆಯ ವಿದ್ಯಾರ್ಥಿಗಳ ಪ್ರಾಯೋಗಿಕ ತರಬೇತಿಗಾಗಿ ಸದರಿ ಕಾಲೇಜಿನಲ್ಲಿ ಮರಣದಿಂದ ಉಂಟಾಗುವ ಶವಗಳ ಮರಣೋತ್ತರ ಶವ ಪರೀಕ್ಷೆಯನ್ನು ನಡೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿದೆ.

(1) ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡಬಾರದು.

(2) ಮರಣೋತ್ತರ ಶವ ಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಳಿಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸುವುದು.

(3) ಕಾಲಕಾಲಕ್ಕೆ ಸರ್ಕಾರವು ನಿಗದಿಪಡಿಸಿದ ಆಸ್ಪತ್ರೆಯ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮೆ ನಡೆಸಿ ಮರಣೋತ್ತರ ಪರೀಕ್ಷೆ ನಡೆಸುವುದು.

(4) ಮರಣ ಕಾರಣ, ಇತ್ಯಾದಿ ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗದಿತ ಸಮಯದೊಳಗೆ ತಯಾರಿಸಿ, ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸುವುದು.

(5) ಮೆಡಿಕೋ ಲೀಗಲ್ ತಜ್ಞರ ಪ್ರಮಾಣ ಪತ್ರವನ್ನು (Expert Opinion) ಸದರಿ ಮಹಾವಿದ್ಯಾಲಯದ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಹೊಂದಿದವರು ಮಾತ್ರ ನೀಡುವುದು.

(6) ಮರಣೋತ್ತರ ಶವ ಪರೀಕ್ಷೆಗೆ ಆಗುವ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ.

(7) ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಯನ್ನು ಸರ್ಕಾರ ಭರಿಸುವುದಿಲ್ಲ.

(8) ಶವ ಪರೀಕ್ಷೆ ನಡೆಸಿದ ತಜ್ಞರು ಉದ್ಯೋಗದಲ್ಲಿ ಮುಂದುವರೆಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರು ಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಮಹಾವಿದ್ಯಾಲಯದ್ದಾಗಿರುತ್ತದೆ.

(9) ಮೆಡಿಕೊ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ, ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

4) ಮೇಲ್ಕಂಡ ಷರತ್ತು ಮತ್ತು ನಿಬಂಧನೆಗಳಲ್ಲದೆ ಸರ್ಕಾರ/ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ/ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸುವ ಸ್ಥಾಯಿ ಆದೇಶಗಳನ್ನು/ಸೂಚನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಬಿ. ಗಣಾಚಾರಿ**

ಪಿ.ಆರ್. 1291

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

**ವಿಷಯ:** 2006–07ನೇ ಶೈಕ್ಷಣಿಕ ಸಾಲಿನಲ್ಲಿ ನರ್ಸಿಂಗ್, ಫಾರ್ಮಸಿ ಮತ್ತು ಫಿಸಿಯೋಥೆರಪಿ ಪದವಿ ಕೋರ್ಸುಗಳ ಸೀಟುಗಳಿಗೆ ಆಯ್ಕೆ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 30–08–2005 ಸಂಖ್ಯೆ: ಆಕುಕ 2 ಎಂಪಿಎಸ್ 2005ರ ಅಧಿಸೂಚನೆ.

2) ದಿನಾಂಕ 17–05–2006 ಸಂಖ್ಯೆ: ಆಕುಕ 179 ಪಿಟಿಡಿ 2005ರ ಸರ್ಕಾರಿ ಆದೇಶ.

3) ದಿನಾಂಕ 17–07–2006 ಸಂಖ್ಯೆ: ಎಂಸಿಎಸ್/11/2006–07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1) ಮೇಲೆ ಕ್ರಮ ಸಂಖ್ಯೆ:1ರಲ್ಲಿ ಓದಲಾದ ಅಧಿಸೂಚನೆಯಲ್ಲಿ The Karnataka Selection of candidates for admission to Nursing, Pharmacy and Physiotherapy courses Rules, 2003 ಗಳನ್ನು ಭಾಗಶ: ಮಾರ್ಪಡಿಸಿ, ಇದೇ ನಿಯಮಾವಳಿಯ ನಿಯಮ 11ರಡಿಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಉಪಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು | ಅಧ್ಯಕ್ಷರು |
| 2 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 4 | ಸರ್ಕಾರದ ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 5 | ಉಪನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 6 | ಪ್ರಾಂಶುಪಾಲರು, ಸರ್ಕಾರಿ ನರ್ಸಿಂಗ್ ಕಾಲೇಜು | ಸದಸ್ಯರು |
| 7 | ಪ್ರಾಂಶುಪಾಲರು, ಸರ್ಕಾರಿ ಫಾರ್ಮಸಿ ಕಾಲೇಜು | ಸದಸ್ಯರು |

2) ಮೇಲೆ ಕ್ರಮ ಸಂಖ್ಯೆ:2ರಲ್ಲಿ ಓದಲಾದ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಅಡಿಯಲ್ಲಿ ಬರುವ ರಾಜ್ಯದ ಖಾಸಗಿ ನರ್ಸಿಂಗ್, ಫಾರ್ಮಸಿ ಮತ್ತು ಫಿಸಿಯೋಥೆರಪಿ ಮಹಾವಿದ್ಯಾಲಯದ ಪದವಿ ಪೂರ್ವ ಸೀಟುಗಳ ಮತ್ತು ಪ್ರವೇಶ ಮಿತಿಗೆ ಸಂಬಂಧಪಟ್ಟಂತೆ 2005-06ನೇ ಸಾಲಿನಲ್ಲಿ ಅಳವಡಿಸಿಕೊಂಡಿದ್ದ ಪ್ರಕ್ರಿಯೆಯನ್ನು 2006-07ನೇ ಶೈಕ್ಷಣಿಕ ಸಾಲಿನಲ್ಲಿ ಮುಂದುವರೆಸಿ ಆದೇಶಿಸಲಾಗಿದೆ.

3) ಮೇಲೆ ಕ್ರಮ ಸಂಖ್ಯೆ:3ರಲ್ಲಿ ಓದಲಾದ ಪತ್ರದಲ್ಲಿ ನರ್ಸಿಂಗ್, ಫಾರ್ಮಸಿ ಮತ್ತು ಫಿಸಿಯೋಥೆರಪಿ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ, ಆಯ್ಕೆ ಪ್ರಕ್ರಿಯೆಯನ್ನು ಹಾಗೂ ಕೌನ್ಸಿಲಿಂಗ್‌ನ್ನು ನಡೆಸಲು ಒಂದು ಸಮಿತಿಯನ್ನು ರಚಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರವರು ಪ್ರಸ್ತಾಪಿಸಿರುತ್ತಾರೆ.

4) ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 361 ಎಂಪಿಎಸ್ 2006, ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2006**

5) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, 2005-06ನೇ ಸಾಲಿನಲ್ಲಿ ದಿನಾಂಕ 30-08-2005 ಸಂಖ್ಯೆ: ಆಕುಕ 2 ಎಂಪಿಎಸ್ 2005ರ ಸರ್ಕಾರದ ಅಧಿಸೂಚನೆಯನ್ವಯ ರಚಿಸಿದ ಆಯ್ಕೆ ಸಮಿತಿಯನ್ನು 2006-07ನೇ ಸಾಲಿನಲ್ಲಿ ನರ್ಸಿಂಗ್, ಫಾರ್ಮಸಿ ಮತ್ತು ಫಿಸಿಯೋಥೆರಪಿ ಸೀಟುಗಳ ಆಯ್ಕೆ ಪ್ರಕ್ರಿಯೆಯನ್ನು ಹಾಗೂ ಕೌನ್ಸಿಲಿಂಗನ್ನು ನಡೆಸಲು ಸದರಿ ಸಮಿತಿಯನ್ನು ಯಥಾ ಸ್ಥಿತಿ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

ಪಿ.ಆರ್. 1292

**ವಿಷಯ:** ಶುಶ್ರೂಷ ದಾದಿಯರ ಪರೀಕ್ಷಾ ಶುಲ್ಕ ಇನ್ನಿತರೆ ಶುಲ್ಕ ಮತ್ತು ಪರೀಕ್ಷಾರ್ಥಿಗಳ ಸಂಭಾವನೆಯ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ:** 1) ದಿನಾಂಕ 07-06-2000 ಸಂಖ್ಯೆ: ಆಕುಕ 126 ಎಂಎಂಇ 95ರ ಸರ್ಕಾರಿ ಆದೇಶ.

2) ದಿನಾಂಕ 14-03-2005 ಸಂಖ್ಯೆ:ಕ.ರಾ.ಶು.ಪ.ಮ./249/2004-05ರ ಕರ್ನಾಟಕ ರಾಜ್ಯ ಶುಶ್ರೂಷಾ ಪರೀಕ್ಷಾ ಮಂಡಳಿಯ ಪೀಠಸ್ಥರ ಪತ್ರ.

**ಪ್ರಸ್ತಾವನೆ:**

1) ಮೇಲೆ ಕ್ರಮ ಸಂಖ್ಯೆ:1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 1995ನೇ ಸಾಲಿನಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಶುಶ್ರೂಷ ದಾದಿಯರ ಪರೀಕ್ಷಾ ಶುಲ್ಕ ಇನ್ನಿತರೆ ಶುಲ್ಕ ಮತ್ತು ಪರೀಕ್ಷಾರ್ಥಿಗಳ ಸಂಭಾವನೆಯ ಪರಿಷ್ಕರಣೆ ಮಾಡಲಾಗಿತ್ತು.

2) ಮೇಲೆ ಕ್ರಮ ಸಂಖ್ಯೆ:2ರಲ್ಲಿ ಓದಲಾದ ಪತ್ರದಲ್ಲಿ ಪೀಠಸ್ಥರು, ಕರ್ನಾಟಕ ರಾಜ್ಯ ಶುಶ್ರೂಷಾ ಪರೀಕ್ಷಾ ಮಂಡಳಿ ಇವರು ಈಗಾಗಲೇ ಶುಶ್ರೂಷ ದಾದಿಯರ ಪರೀಕ್ಷಾ ಶುಲ್ಕ ಇನ್ನಿತರೆ ಶುಲ್ಕ ಮತ್ತು ಪರೀಕ್ಷಾರ್ಥಿಗಳ ಸಂಭಾವನೆಯನ್ನು ಪರಿಷ್ಕರಿಸಿ 10 ವರ್ಷಗಳು ಕಳೆದಿದ್ದು, ಈಗ ಪರೀಕ್ಷೆಗೆ ಬೇಕಾಗಿರುವ ಸಾಮಗ್ರಿಗಳ ಬೆಲೆ ದುಬಾರಿಯಾಗಿದ್ದು ಮುದ್ರಣದ ವೆಚ್ಚ, ಸಾಗಾಣಿಕೆ ವೆಚ್ಚ, ದೂರವಾಣಿ ವೆಚ್ಚ ಹಾಗೂ ಇನ್ನಿತರೆ ಬಾಬ್ತಿಗಳಲ್ಲಿನ ವೆಚ್ಚವು ಹೆಚ್ಚಾಗಿರುವುದರಿಂದ ದಿನಾಂಕ: 01-09-2004ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸುವಂತೆ ಕೋರಿರುತ್ತಾರೆ.

3) ಮುಂದುವರೆದು ಪೀಠಸ್ಥರು, ಕರ್ನಾಟಕ ರಾಜ್ಯ ಶುಶ್ರೂಷಾ ಪರೀಕ್ಷಾ ಮಂಡಳಿ ಇವರು ಸಾಮಾನ್ಯ ಶುಶ್ರೂಷಾ ಪರೀಕ್ಷೆಯಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿಗಳಾದಂತಹ (1) ಪ್ರಶ್ನೆ ಪತ್ರಿಕೆಗಳನ್ನು ಸಿದ್ಧಪಡಿಸುವವರು (Question Paper Setter), (2) ಮುಖ್ಯ ಮತ್ತು ಉಪಮುಖ್ಯ ಅಧೀಕ್ಷಕರುಗಳು (Chief Superintendents & Deputy Superintendents) (3) ಮೌಲ್ಯಮಾಪಕರು (Evaluaters) (4) ಕೊಠಡಿ ಮೇಲ್ವಿಚಾರಕರು (Invigilators) ಹಾಗೂ ಇತರರಿಗೆ ನೀಡಲಾಗುತ್ತಿರುವ ಸಂಭಾವನೆಯನ್ನು ಹೆಚ್ಚಿಸುವಂತೆ ಕೋರುತ್ತಾ, ಈ ವೆಚ್ಚವನ್ನು ಪರೀಕ್ಷಾ ಮಂಡಳಿಯಿಂದ ವಸೂಲಿ ಮಾಡುವ ಪರೀಕ್ಷಾ ಶುಲ್ಕ ಮತ್ತು ಮರು ಮೌಲ್ಯಮಾಪನದ ಶುಲ್ಕದ ಮೊಬಲಗಿನಿಂದಲೇ ಭರಿಸಲಾಗುವುದು ಹಾಗೂ ಈ ವೆಚ್ಚದಿಂದ ಸರ್ಕಾರಕ್ಕೆ ಯಾವುದೇ ಹೊರೆ ಬೀಳುವುದಿಲ್ಲವೆಂದು ತಿಳಿಸಿರುತ್ತಾರೆ.

4) ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 536 ಎಂಎಂಇ 2004, ಬೆಂಗಳೂರು, ದಿನಾಂಕ 22ನೇ ಆಗಸ್ಟ್ 2006**

5) ಶುಶ್ರೂಷ ದಾದಿಯರ ಪರೀಕ್ಷಾ ಶುಲ್ಕ, ಇನ್ನಿತರೆ ಶುಲ್ಕ ಮತ್ತು ಪರೀಕ್ಷಾರ್ಥಿಗಳ ಸಂಭಾವನೆಯನ್ನು 01-04-2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅನುಬಂಧ-1ರಲ್ಲಿ ನಮೂದಿಸಿರುವಂತೆ ಹೆಚ್ಚಿಸಿ/ಪರಿಷ್ಕರಿಸಿ ಆದೇಶಿಸಿದೆ.

6) ಅದೇ ರೀತಿ (1) ಪ್ರಶ್ನೆ ಪತ್ರಿಕೆಗಳನ್ನು ಸಿದ್ಧಪಡಿಸುವವರು (Question Paper Setter), (2) ಮುಖ್ಯ ಮತ್ತು ಉಪಮುಖ್ಯ ಅಧೀಕ್ಷಕರುಗಳು (Chief Superintendents & Deputy Superintendents) (3) ಮೌಲ್ಯಮಾಪಕರು (Evaluaters) (4) ಕೊಠಡಿ ಮೇಲ್ವಿಚಾರಕರು (Invigilators) ಹಾಗೂ ಇತರರಿಗೆ ನೀಡಲಾಗುತ್ತಿರುವ ಸಂಭಾವನೆಯನ್ನು ಸರ್ಕಾರಕ್ಕೆ ಯಾವುದೇ ರೀತಿಯ ಆರ್ಥಿಕ ಹೊರೆ ಬೀಳಬಾರದೆಂಬ ಷರತ್ತಿಗೊಳಪಟ್ಟು, ಈ ಆದೇಶ ಹೊರಡಿಸಿದ

ದಿನಾಂಕದಿಂದ ಮುಂದಿನ 5 ವರ್ಷಗಳ ಅವಧಿಯವರೆಗೆ ಅನುಬಂಧ–2ರಲ್ಲಿ ನಮೂದಿಸಿರುವಂತೆ ಹೆಚ್ಚಿಸಿ/ಪರಿಷ್ಕರಿಸಿ ಆದೇಶಿಸಿದೆ.

7) ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 17–08–2006 ಸಂಖ್ಯೆ: ಆಇ 1256 ವೆಚ್ಚ:5/2006ರ ಅನಧಿಕೃತ ಟಿಪ್ಪಣಿ ಯಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಾಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

**ಅನುಬಂಧ–1**

| ವಿವರ | ಪ್ರಸ್ತುತ ಇರುವ ಶುಲ್ಕ | ಹೆಚ್ಚಿಸಬೇಕಾಗಿರುವ ಶುಲ್ಕ |
|---|---|---|
| 1. **ಪರೀಕ್ಷಾ ಶುಲ್ಕ**<br>1. ಮೊದಲನೇ ವರ್ಷ<br>2. ಎರಡನೇ ವರ್ಷ<br>3. ಮೂರನೇ ವರ್ಷ | <br>ರೂ.200.00<br>ರೂ.200.00<br>ರೂ.200.00 | <br>ರೂ.300.00<br>ರೂ.300.00<br>ರೂ.300.00 |
| 2. **ಅನುತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪರೀಕ್ಷಾ ಶುಲ್ಕ**<br>1. ಒಂದು ಪೇಪರಿಗೆ<br>2. ಎರಡು ಪೇಪರುಗಳಿಗೆ ಮತ್ತು ಹೆಚ್ಚಿಗೆ ಪೇಪರುಗಳಿಗೆ (Theory & Practical) | <br>ರೂ.75.00<br>ರೂ.200.00 | <br>ರೂ.100.00<br>ರೂ.300.00 |
| 3. ಮರು ಮೌಲ್ಯಮಾಪನ ಶುಲ್ಕ ಪ್ರತಿ ಪೇಪರಿಗೆ (Revaluation Fee) | ರೂ.200.00 | ರೂ.300.00 |
| 4. ಮೂರು ವರ್ಷದ ಕ್ರೋಡಿಕರಿಸಿದ ಅಂಕಪಟ್ಟಿಗೆ (Consolidated marks card 3 Years) | ರೂ.200.00 | ರೂ.200.00 |
| 5. ನಕಲು ಅಂಕಪಟ್ಟಿಗೆ (Duplicate marks card) | ರೂ. 50.00 | ರೂ.100.00 |
| 6. ಜನರಲ್ ನರ್ಸಿಂಗ್ ಮತ್ತು ಮಿಡ್‌ವೈಫ಼ರಿ ಪ್ರಮಾಣ (GNM Certificate) | – | ರೂ.150.00 |
| 7. ಪ್ರಮಾಣ ಪತ್ರ ತಿದ್ದುಪಡಿ ಮಾಡಲು (Correction in certificate) | ರೂ..200.00 | ರೂ.200.00 |
| 8. ಹೊಸ ಶುಶ್ರೂಷಾ ಶಾಲೆಯ ನೋಂದಣಿ ಶುಲ್ಕ (Registration Fee)<br>ಎ. ಹಳೆ ಶುಶ್ರೂಷಾ ಶಾಲೆಯ ನವೀಕರಣ ಶುಲ್ಕ (Renewal Fee) | ರೂ.5000.00<br>ರೂ.2000.00 | ರೂ.10,000.00<br>ರೂ.5000.00 |
| 9. ಆಫಿಲಿಯೇಷನ್ ಶುಲ್ಕ (Affiliation Fee) | – | ಪ್ರವೇಶ ಮಾಡಿಕೊಂಡ ವಿದ್ಯಾರ್ಥಿಗಳ ಸಂಖ್ಯೆ X 200 ರೂ. |
| 10. ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಕೊಂಡ ಪಟ್ಟಿಯನ್ನು ನಿಗದಿತ ಅವಧಿಯಲ್ಲಿ ಪರೀಕ್ಷಾ ಮಂಡಳಿಗೆ ಸಲ್ಲಿಸದೇ ಇರುವುದಕ್ಕೆ ದಂಡ (Penalty for late submission of admitted list of students after due date) | – | ಪ್ರವೇಶ ಮಾಡಿಕೊಂಡ ವಿದ್ಯಾರ್ಥಿಗಳ ಸಂಖ್ಯೆ X 1000 ರೂ. |

**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

**ಅನುಬಂಧ–2**

| ಕ್ರಮ ಸಂಖ್ಯೆ | ವಿವರ | ಪ್ರಸ್ತುತ ಇರುವ ಶುಲ್ಕ | ಹೆಚ್ಚಿಸಬೇಕಾಗಿರುವ ಶುಲ್ಕ |
|---|---|---|---|
| 1 | Chairman | 1.5% | 0.5% ಅಥವಾ ತಿಂಗಳಿಗೆ ರೂ.8,000/–. ಇವೆರಡರಲ್ಲಿ ಯಾವುದು ಕಡಮೆಯೋ ಅದು. |
| 2 | Deputy Chairman | 1.5% | 0.5% ಅಥವಾ ತಿಂಗಳಿಗೆ ರೂ.6,000/–. ಇವೆರಡರಲ್ಲಿ ಯಾವುದು ಕಡಿಮೆಯೋ ಅದು. |

| ಕ್ರಮ ಸಂಖ್ಯೆ | ವಿವರ | ಪ್ರಸ್ತುತ ಇರುವ ಶುಲ್ಕ | ಹೆಚ್ಚಿಸಬೇಕಾಗಿರುವ ಶುಲ್ಕ |
|---|---|---|---|
| 3 | Secretary | 3% | 1% ಅಥವಾ ತಿಂಗಳಿಗೆ ರೂ.8,000/-. ಇವೆರಡರಲ್ಲಿ ಯಾವುದು ಕಡಿಮೆಯೋ ಅದು. |
| 4 | Board Member from Directorate (Senior Asst. Director for Nursing) | 1.5% | 0.5% ಅಥವಾ ತಿಂಗಳಿಗೆ ರೂ.3,000/-. ಇವೆರಡರಲ್ಲಿ ಯಾವುದು ಕಡಿಮೆಯೋ ಅದು. |
| 5 | Question paper Setting | 0.5%<br>(ಪ್ರತಿ ಪತ್ರಿಕೆಗೆ ರೂ.500/-) | 0.5%<br>(ಪ್ರತಿ ಪತ್ರಿಕೆಗೆ ರೂ.750/-) |
| 6 | Review of Question Papers | 0.5% | 0.5%<br>(ಪ್ರತಿ ಪತ್ರಿಕೆಗೆ ರೂ.200/-) |
| 7 | Chief Superintendent | 1.5%<br>(ಪ್ರತಿ ಸೆಷನ್‌ಗೆ ರೂ.100/-) | 1.5%<br>(ಪ್ರತಿ ಸೆಷನ್‌ಗೆ ರೂ.150/-) |
| 8 | Deputy Chief Superintendent | 0.5%<br>(ಪ್ರತಿ ಸೆಷನ್‌ಗೆ ರೂ.75/-) | 1%<br>(ಪ್ರತಿ ಸೆಷನ್‌ಗೆ ರೂ.125/-) |
| 9 | Observers | ---- | 1%<br>(ಪ್ರತಿ ಸೆಷನ್‌ಗೆ ರೂ.100/-) |
| 10 | Invigilators | 4%<br>(ಪ್ರತಿ ಸೆಷನ್‌ಗೆ ರೂ.40/-) | 4%<br>(ಪ್ರತಿ ಸೆಷನ್‌ಗೆ ರೂ.75/-) |
| 11 | Practical Co-Ordinator | 0.5%<br>(ಪ್ರತಿ ಸೆಷನ್‌ಗೆ ರೂ.50/-) | 0.5%<br>(1ರಿಂದ 3 ಶಾಲೆಗಳು ಹೊಂದಿಕೊಂಡಿದ್ದರೆ - ರೂ.400, 4ಕ್ಕಿಂತ ಹೆಚ್ಚಿಗೆ ಇದ್ದರೆ ರೂ.800/-) |
| 12 | Practical Examiners | 16%<br>ಪ್ರತಿ ವಿದ್ಯಾರ್ಥಿಗೆ ರೂ.12/- | 16%<br>ಪ್ರತಿ ವಿದ್ಯಾರ್ಥಿಗೆ ರೂ.18/- |
| 13 | Coding and Decoding | 0.5%<br>ಪ್ರತಿ ಪತ್ರಿಕೆಗೆ ರೂ.0.50 | 1.5%<br>ಪ್ರತಿ ದಿನಕ್ಕೆ ರೂ.100/- |
| 14 | Evaluators | 15%<br>ಪ್ರತಿ ಪತ್ರಿಕೆಗೆ ರೂ.7/- | ಪ್ರತಿ ಪತ್ರಿಕೆಗೆ ರೂ.10/- } 15% |
| 15 | Reviewer | 1%<br>ಪ್ರತಿ ದಿನಕ್ಕೆ ರೂ.200/- | ಪ್ರತಿ ದಿನಕ್ಕೆ ರೂ.400/- } |
| 16 | Tabulation | 0.5%<br>ಪ್ರತಿ ಪತ್ರಿಕೆಗೆ ರೂ.1.50 | 2%<br>ಪ್ರತಿ ದಿನಕ್ಕೆ ಒಬ್ಬರಿಗೆ ರೂ.300/- |
| 17 | Inspection Squad (for Exam Duty) | 1% | 1%<br>(Board Member ಸೇರಿದಂತೆ ಪ್ರತಿ ದಿನಕ್ಕೆ ಒಬ್ಬರಿಗೆ ರೂ.500) |
| 18 | i) Chief Custodian<br><br>ii) Deputy Custodian | 0.5%<br>ಪ್ರತಿ ದಿನಕ್ಕೆ ಒಬ್ಬರಿಗೆ ರೂ.300/-<br>-- | 1%<br>ಪ್ರತಿ ದಿನಕ್ಕೆ ಒಬ್ಬರಿಗೆ ರೂ.500/-<br><br>ಪ್ರತಿ ದಿನಕ್ಕೆ ಒಬ್ಬರಿಗೆ ರೂ.400/- |
| 19 | Printing and Stationery | 20% | 23% |
| 20 | TA and DA | 6% | 6%<br>**TA&DA and Conveyance charges fixed as follows**<br>**Travelling Allowance:** The Officers/Officials deputed for examination duties and other Nursing |

| ಕ್ರಮ ಸಂಖ್ಯೆ | ವಿವರ | ಪ್ರಸ್ತುತ ಇರುವ ಶುಲ್ಕ | ಹೆಚ್ಚಿಸಬೇಕಾಗಿರುವ ಶುಲ್ಕ |
|---|---|---|---|
| | | | Board work, are entitled for drawal of I Class Railway fare or Bus fare (Including Luxury Bus from Head Quarters to place of duty point or vice verse without production of tickets and certificates. Auto charges Rs.25/- from Railway station/Bus Station to duty point or vice versa is admissible in all places.<br>**B. Daily allowance:**<br>1) Halt at Bangalore – Rs.300/- per day<br>2) Halt at Other Corporation Cities – Rs.250/- per day<br>3) Halt at other places – Rs.200/- per day<br>**C. Conveyance Charges:**<br>1) Auto fare Rs.50/- per day from halting place / Residence to place of duty or vice versa is admissible in all places for exam duty and other Nursing Board work.<br>2) Nursing Examination Board Officials deputed to other offices for Board work – Actual Auto fare upto a maximum Rs.50/- per day is admissible. |
| 21 | Postage | 1% | 3% |
| 22 | Transportation of Examination Materials | --- | 4% |
| 23 | Salaries of Office Staff, Group D including security | 10% | 10% |
| 24 | Staff involved in Examination Centers | --- | 0.5% (ಪ್ರತಿ ಸೆಷನ್‌ಗೆ ಒಬ್ಬರಿಗೆ ರೂ.25/-) |
| 25 | Telephone | ---- | 2% |
| 26 | Remuneration for Board Members (Sitting Fee) | ಪ್ರತಿ ಸಿಟ್ಟಿಂಗ್‌ಗೆ ರೂ.250/- | 0.5% (ಪ್ರತಿ ಸಿಟ್ಟಿಂಗ್‌ಗೆ ರೂ.500/-) |
| 27 | Inspector/Enquiry of Nursing Schools | ---- | 0.5% (ಒಂದು ದಿನಕ್ಕೆ ರೂ.500/-) |
| 28 | Board Work | ---- | 0.5% (ಒಂದು ದಿನಕ್ಕೆ ರೂ.300/-) |
| 29 | Govt. Share | 3% | --- |
| 30 | Accountant cum FDC | 2% | --- |
| 31 | Security Guard | 0.5% (ಒಂದು ದಿನಕ್ಕೆ ರೂ.50/-) | --- |
| 32 | Preparation of Certificates | 1% | --- |
| 33 | Attenders and Peons | 1% | --- |

| ಕ್ರಮ ಸಂಖ್ಯೆ | ವಿವರ | ಪ್ರಸ್ತುತ ಇರುವ ಶುಲ್ಕ | ಹೆಚ್ಚಿಸಬೇಕಾಗಿರುವ ಶುಲ್ಕ |
|---|---|---|---|
| 34 | Computerisation of Results and preparation of Marks Cards | 5% | -- |
| 35 | Miscellaneous | 1% | 2% |

**ಟಿಪ್ಪಣಿ:**

1) ಮೇಲೆ ತಿಳಿಸಿದ ಶೇಕಡವಾರನ್ನು ಒಟ್ಟು ವಸೂಲಾದ ಪರೀಕ್ಷಾ ಶುಲ್ಕ ಮತ್ತು ಮರುಮೌಲ್ಯಮಾಪನ ಶುಲ್ಕದ ಆಧಾರದ ಮೇಲೆ ಲೆಕ್ಕ ಹಾಕಲಾಗಿದೆ.
2) ಮೇಲೆ ತಿಳಿಸಿದ ವಿವಿಧ ಬಾಬತ್ತಿನಲ್ಲಿ ನಿಗದಿಪಡಿಸಿದ್ದ ಹಣಕ್ಕಿಂತ ಅನಿವಾರ್ಯವಾಗಿ ಹೆಚ್ಚಿಗೆ ಖರ್ಚು ಮಾಡಬೇಕಾದ ಸಂದರ್ಭ ಬಂದಲ್ಲಿ ಒಂದು ಬಾಬತ್ತಿನಲ್ಲಿ ನಿಗದಿಪಡಿಸಿದ್ದ ವೆಚ್ಚದಲ್ಲಿ ಉಳಿತಾಯವಾಗುವ ಹಣವನ್ನು ಇತರೆ ಬಾಬತ್ತಿನ ಹಣಕ್ಕೆ ಮರು ಹೊಂದಾಣಿಕೆ ಮಾಡಿ ಖರ್ಚನ್ನು ಭರಿಸುವುದು.
3) ಪರೀಕ್ಷಾ ಮಂಡಳಿಯಲ್ಲಿ ವಸೂಲಾದ ಪರೀಕ್ಷಾ ಶುಲ್ಕ ಮತ್ತು ಮರುಮೌಲ್ಯಮಾಪನ ಶುಲ್ಕದಲ್ಲಿ ಮೇಲೆ ತಿಳಿಸಿದ ವಿವಿಧ ಬಾಬತ್ತುಗಳಲ್ಲಿ, ವೆಚ್ಚವನ್ನು ಭರಿಸಿ ಉಳಿತಾಯವಾಗುವ ಹಣವನ್ನು ಹಾಗೂ ಇತರೆ ಬಾಬತ್ತಿನಿಂದ ಬರುವ ಆದಾಯದಲ್ಲಿ ಪೀಠೋಪಕರಣಗಳನ್ನು ಖರೀದಿಸಲು, ಕಟ್ಟಡದ ಬಾಡಿಗೆ, ವಿದ್ಯುಚ್ಛಕ್ತಿ, ಪರೀಕ್ಷಾ ಮಂಡಳಿಯ ಸ್ವಂತ ಕಟ್ಟಡದ ನಿಧಿಗಾಗಿ ಹಾಗೂ ಮೇಲೆ ತಿಳಿಸಿದ ಬಾಬತ್ತನ್ನು ಹೊರತುಪಡಿಸಿ ಪರೀಕ್ಷಾ ಮಂಡಳಿಯ ಇತರೆ ಕೆಲಸಕ್ಕೆ ಮೀಸಲಾಗಿಡುವುದು.

**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1293 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

ಒಳಾಡಳಿತ ಸಚಿವಾಲಯ

ವಿಷಯ: ಶ್ರೀ ಕೆ.ನಾಗರಾಜು, ಸಿಪಿಸಿ-348, ದಾವಣಗೆರೆ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/5/ಇ ವಿ/1/6/2003, ಓಬಿ ಸಂಖ್ಯೆ:39/2004-05, ದಿನಾಂಕ:01-06-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ. ಇವರ ಆದೇಶ ಸಂಖ್ಯೆ:10/ಅಪೀಲು/2004-05, ಓಬಿ ಸಂಖ್ಯೆ:170/2004-05, ದಿನಾಂಕ: 26-02-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26-06-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/104/2005, ದಿನಾಂಕ:31-12-2005.

ಪ್ರಸ್ತಾವನೆ:

ಶ್ರೀ ಕೆ.ನಾಗರಾಜು, ಸಿಪಿಸಿ-348, ದಾವಣಗೆರೆ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷಾರೋಪಣೆ:

"ನೀವು ಈ ಮುಂಚೆ ಬಿಳಿಚೋಡು ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದಾಗ, ದಿನಾಂಕ:10-06-2003 ರಂದು ರಾತ್ರಿ 12-15 ಗಂಟೆಗೆ ನಿಮ್ಮ ಸಹೋದ್ಯೋಗಿ ಶ್ರೀ ಜೆ.ಟಿ.ಮಂಜಪ್ಪ, ಸಿಪಿಸಿ-241 ರವರು ಬಿಳಿಚೋಡು ಪೊಲೀಸ್ ಠಾಣೆಯ ಪಹರೆ ಕರ್ತವ್ಯದಲ್ಲಿದ್ದಾಗ, ನೀವು ಬಿಳಿಚೋಡು ವಸತಿ ಗೃಹದಲ್ಲಿ ವಾಸವಾಗಿರುವ ಅವರ ಮನೆಯ ಹತ್ತಿರ ಹೋಗಿ ಅವರ ಪತ್ನಿ ಶ್ರೀಮತಿ ಕೆ.ಜಿ.ಸಾವಿತ್ರಮ್ಮ, ಎಂಬುವರು ಒಬ್ಬರೇ ತಮ್ಮ ಮಕ್ಕಳ ಜೊತೆ ಮಲಗಿದ್ದಾಗ, ಅವರನ್ನು ಕಿಟಕಿಯಿಂದ ಕೂಗಿ ಎಬ್ಬಿಸಿ, ಅವರ ಮೇಲೆ ನನಗೆ ಆಸೆ ಇದೆ ಮಲಗಲು ಬಾ ಎಂದು ಕರೆದಿದ್ದು, ಅದಕ್ಕೆ ಅವರು ತನ್ನ ಪತಿಯನ್ನು ಕರೆಯುವುದಾಗಿ ಹೇಳಿದ್ದರಿಂದ ನೀವು ವಾಪಸ್ಸು ಹೋಗಿ, ಪುನ: ಬೆಳಗಿನ ಜಾವ 3-00 ಗಂಟೆಗೆ ಅವರ ಮನೆಗೆ ಮತ್ತೆ ಬಂದು ಅವರು ಮಲಗಿದ್ದ ಕೋಣೆಯ ಕಿಟಕಿಯನ್ನು ದಬ್ಬಿ, ಪುನ: ಅವರನ್ನು ಬಾಗಿಲು ತೆಗಿ ಎಂದು ಒತ್ತಾಯಿಸಿ, ಅವರ ಕೈಯನ್ನು ಹಿಡಿದು ಎಳೆದಾಡಿ ನೀವು ಅತೀವ ದುರ್ನಡತೆಯನ್ನು ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:01-06-2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಸಿಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಐದು ವರ್ಷಗಳ ಕಾಲ ಇಳಿಸಿ, ಐದು ವರ್ಷಗಳ ನಂತರ ಸಿಪಿಸಿ ಹುದ್ದೆಯ ಕನಿಷ್ಟ ಮಟ್ಟದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:26-02-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪೊಲೀಸ್ ಇ ಲಾಖೆಯಲ್ಲಿ ಶಿಸ್ತನ್ನು ಕಾಪಾಡುವ, ಜನರನ್ನು ರಕ್ಷಿಸುವ ಅಧಿಕಾರಿಯಾಗಿ, ತಾವೇ ಶಿಸ್ತನ್ನು ಪಾಲಿಸದೇ ಒಬ್ಬ ಮಹಿಳೆಯನ್ನು ಬಲತ್ಕರಿಸಲು ಪ್ರಯತ್ನಿಸಿರುವುದು ಖಂಡನೀಯ ಹಾಗೂ ಹೇಯ ಕೃತ್ಯ ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 24 ಪೊಸಿಅ 2006 ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ನಾಗರಾಜ್, ಸಿಪಿಸಿ-348 ದಾವಣಗೆರೆ ಜಿಲ್ಲೆ, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:26-06-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎ. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1308

ವಿಷಯ: ಶ್ರೀ ಡಿ.ಕೆ.ಕೆಂಪಯ್ಯ, ಪಿಎಸ್ಐ., ಬೆಂಗಳೂರು ಗ್ರಾಮಾಂತರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇ ವರ ಆದೇಶ ಸಂಖ್ಯೆ:ಪನ್ಸಿ/ಡಿಇ /28/2000-01, ಒಬಿ ಸಂಖ್ಯೆ:76/2001-02, ದಿನಾಂಕ:21-06-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇ ವರ ಆದೇಶ ಸಂಖ್ಯೆ:ಅಪೀಲು/1/22/2001-02, ದಿನಾಂಕ:02-09-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:ಜನವರಿ 2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/6/2005, ದಿನಾಂಕ:30-04-2005.

ಪ್ರಸ್ತಾವನೆ:

ಶ್ರೀ ಡಿ.ಕೆಂಪಯ್ಯ, ಪಿಎಸ್ಐ ಹಿಂದೆ ಸಾತನೂರು ಪೊಲೀಸ್ ಠಾಣೆ, ಇ ವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

ದೋಷರೋಪಣೆ:

"ಕಂಸಾಗರದ ಗ್ರಾಮದ ವಾಸಿ ರಾಮು ಬಿನ್ ಲೇಟ್ ಚೌಡೇಗೌಡ ಎಂಬುವವರನ್ನು ಸಾತನೂರು ಹೋಬಳಿ ಕಂಸಾಗರ ಗ್ರಾಮದ ಗುಂಡೇಗೌಡರ ಕೊಲೆ ಪ್ರಕರಣಕ್ಕೆ ಸಂಬಂಧಿಸಿದಂತೆ ಠಾಣೆಗೆ ಕರೆದುಕೊಂಡು ಹೋಗಿ ಅನಧೀಕೃತವಾಗಿ ಠಾಣೆಯಲ್ಲಿಟ್ಟು ಅವಾಚ್ಯ ಶಬ್ದಗಳಿಂದ ಬೈದು, ಬಾಂಬೇ ಕಟ್ ಹಾಕಿ ಹೊಡೆದು ಹಿಂಸೆ ಮಾಡಿ ಇ ವರ ಕಾಲಿನ ಹೆಬ್ಬೆರಳ ಉಗುರನ್ನು ಕೀಳಲು ಪ್ರಯತ್ನಿಸಿ, ಮಧ್ಯಪಾನ ಮಾಡಿಸಿ ಕೊಲೆಯನ್ನು ಇ ವರೇ ಮಾಡಿರುವುದಾಗಿ ಒಪ್ಪಿಕೊಳ್ಳುವಂತೆ ಒತ್ತಾಯ ಮಾಡಿ ಇ ವರಿಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸೆ ನೀಡಿ ಹೆಚ್ಚಿನ ಬಲ ಪ್ರಯೋಗ ಮಾಡಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇ ಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಇ ವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:21-06-2001ರ ಆದೇಶದಲ್ಲಿ ಅರ್ಜಿದಾರರ ಪಿಎಸ್ಐ ವೇತನ ಶ್ರೇಣಿಯಲ್ಲಿ ವಾರ್ಷಿಕ ವೇತನದ ಎರಡು ಹಂತಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಇ ಳಿಸಿರುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02-09-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇ ಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿಲ್ಲವೆಂದು ಹೇಳಿದ್ದರೂ, ಅರ್ಜಿದಾರರು ಎಸಗಿರುವ ಕೃತ್ಯ ಹೇಯ ಕೃತ್ಯವಾಗಿರುವುದರಿಂದ ಮತ್ತು ಒಬ್ಬ ನಿರಪರಾಧಿಯನ್ನು ಠಾಣೆಗೆ ಕರೆತಂದು ಅವರ ಕಾಲಿನ ಹೆಬ್ಬೆರಳ ಉಗುರನ್ನು ಕೀಳಲು ಪ್ರಯತ್ನಿಸಿರುವುದು, ಗುರುತರ ದೌರ್ಜನ್ಯವೆಸಗಿರುವುದಕ್ಕೆ ಸಾಕ್ಷಿಯಾಗಿರುತ್ತದೆ ಗಾಯದ ಪ್ರಮಾಣ ಪತ್ರವನ್ನು ಕರ್ನಾಟಕ ವೈದ್ಯಕೀಯ ಇ ಲಾಖೆ, ವಿಕ್ಟೋರಿಯ ಆಸ್ಪತ್ರೆಯವರು ನೀಡಿರುತ್ತಾರೆ. ಈ ಹೇಯ ಕೃತ್ಯಕ್ಕೆ ಇ ನ್ನು ಹೆಚ್ಚಿನ ದಂಡನೆ ವಿಧಿಸಬಹುದಾಗಿತ್ತು. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 85 ಪೊಸಿಅ 2006 ಬೆಂಗಳೂರು, ದಿನಾಂಕ:22ನೇ ಆಗಸ್ಟ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಕೆಂಪಯ್ಯ, ಪಿಎಸ್‌ಐ ಬೆಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ಜನವರಿ 2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್.ಎ. ಕುಲಕರ್ಣಿ

ಪಿ.ಆರ್. 1309

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಶ್ರೀ ಬಿ.ಎಂ.ಮುನಿರತ್ನಂ, ಪಿಎಸ್‌ಐ, ಕೋಲಾರ ಸಂಚಾರಿ ಠಾಣೆ ಯವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

ಓದಲಾಗಿದೆ: 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇ ವರ ಆದೇಶ ಸಂಖ್ಯೆ: ಪಿಆರ್/89/2003/ ಓಬಿ ಸಂಖ್ಯೆ: 2/2004, ದಿನಾಂಕ:08-01-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಪಶ್ಚಿಮ ವಲಯ, ಮಂಗಳೂರು, ಇ ವರ ಆದೇಶ ಸಂಖ್ಯೆ: ಸಿಬ್ಬಂದಿ:3/16/ಪವ/2004 ದಿನಾಂಕ:14-12-2004.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02-02-2005

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/42/2005, ದಿನಾಂಕ:08-12-2005.

ಪ್ರಸ್ತಾವನೆ:

ಶ್ರೀ ಬಿ.ಎಂ.ಮುನಿರತ್ನಂ, ಪಿಎಸ್‌ಐ ಕೋಲಾರ ಸಂಚಾರಿ ಠಾಣೆ, ಇ ವರ ವಿರುದ್ದ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

ದೋಷರೋಪಣೆ:

"ಶ್ರೀ ಬಿ.ಎಂ.ಮುನಿರತ್ನಂ, ಪಿಎಸ್‌ಐ ಈ ಹಿಂದೆ ಮೂಡಿಗೆರೆ ಠಾಣೆ ಆದ ನೀವು ದಿನಾಂಕ:17-07-2003 ರಿಂದ 19-07-2003 ರವರೆಗೆ ಕೋಲಾರ ಮತ್ತು ಮುಳಬಾಗಿಲು ನ್ಯಾಯಾಲಯಕ್ಕೆ ಹಾಜರಾಗಲು ಅನುಮತಿ ಪಡೆದು ಹೋದ ನೀವು ದಿನಾಂಕ:07-08-2003 ರವರೆಗೆ ಕರ್ತವ್ಯಕ್ಕೆ ಹಿಂದಿರುಗದೇ, ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇ ವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:08-01-2004ರ ಆದೇಶದಲ್ಲಿ ಅರ್ಜಿದಾರರ ದಿನಾಂಕ:08-01-2004ರ ಆದೇಶದಲ್ಲಿ ಅರ್ಜಿದಾರರ ದಿನಾಂಕ:20-07-2003 ರಿಂದ 07-08-2003 ರವರೆಗಿನ ಗೈರುಹಾಜರಿ ಅವಧಿಯನ್ನು ``ವೇತನ ರಹಿತ ರಜೆ`` ಎಂದು ಪರಿಗಣಿಸಿ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 14-12-2004ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 31 ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದ್ದರೂ, ಮೇಲಾಧಿಕಾರಿಗಳ ಪೂರ್ವಾನುಮತಿ ಪಡೆಯದೆ, ಯಾರಿಗೂ ತಿಳಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ-ರುವುದು ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಠಾಣೆಯೊಂದರ ಠಾಣಾಧಿಕಾರಿಯಾಗಿ ದೀರ್ಘಕಾಲ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 83 ಪೊಸಿಅ 2006 ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಂ.ಮುನಿರತ್ನಂ, ಪಿಎಸ್‌ಐ ಸಂಚಾರಿ ಪೊಲೀಸ್ ಠಾಣೆ, ಕೋಲಾರ ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:02-02-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1271

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಶ್ರೀ ಕೆ.ಎಲ್.ರಾಮನಾಯಕ್, ಸಿಹೆಚ್‌ಸಿ-226, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇ ವರ ಆದೇಶ ಸಂಖ್ಯೆ:ಸಿಬ್ಬಂದಿ/8/ಇ ವಿ-2/50/2005 ಓಬಿ ಸಂಖ್ಯೆ:533/2004-05, ದಿನಾಂಕ:21-03-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಪೂರ್ವ ವಲಯ, ದಾವಣಗೆರೆ, ಇ ವರ ಆದೇಶ ಸಂಖ್ಯೆ:08/ಅಪೀಲು/ಸಿಬ್ಬಂದಿ-2/2005-06 ಓಬಿ 115/2005-06, ದಿನಾಂಕ:08-08-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-11-2005
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/6/2006, ದಿನಾಂಕ:18-03-2006.

ಪ್ರಸ್ತಾವನೆ:

ಶ್ರೀ ಕೆ.ಎಲ್.ರಾಮನಾಯಕ್, ಸಿಹೆಚ್‌ಸಿ-226 ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇ ವರ ವಿರುದ್ದ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

ದೋಷರೋಪಣೆ:

"ದಿನಾಂಕ:23-01-2005ರಂದು ಚನ್ನಗಿರಿ ತಾಲ್ಲೂಕಿನ ಪಾಂಡೋಮಟ್ಟಿ ಗ್ರಾಮದ ವಿರಕ್ತ ಮಠದಲ್ಲಿ ನಡೆದ ಬಸವ ತತ್ವ ಉದ್ಘಾಟನಾ ಕಾರ್ಯಕ್ರಮದ ಪ್ರಯುಕ್ತ ಮಾನ್ಯ ಮುಖ್ಯ ಮಂತ್ರಿಗಳು ಭೇಟಿ ನೀಡಲಿರುವ ಪ್ರಯುಕ್ತ, ನಿಮಗೆ ವಿರಕ್ತ ಮಠದ ಮುಖ್ಯ ದ್ವಾರದ ಬಳಿ ಬಂದೋಬಸ್ತ್ ಕರ್ತವ್ಯಕ್ಕೆ ನೇಮಕ ಮಾಡಿದ್ದಾಗ, ವಿಧಾನ ಪರಿಷತ್ ಸದಸ್ಯರಾದ ಶ್ರೀಮತಿ ಜಲಜಾನಾಯಕ್ ರವರು ತಮ್ಮ ಕಾರಿನಲ್ಲಿ ಅಲ್ಲಿಗೆ ಬಂದಾಗ, ನೀವು ಅವರ ಕಾರನ್ನು ದ್ವಾರದ ಒಳಗೆ ಬಿಡದೆ ತಡೆಹಿಡಿದು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನವನ್ನು ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇ ವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:21-03-2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:08-08-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಮುಖ್ಯ ಪೇದೆಯಾಗಿದ್ದು, ಇ ಲಾಖೆಯಲ್ಲಿ ಅನುಭವವುಳ್ಳವರಾಗಿದ್ದು, ಸಾರ್ವಜನಿಕ ಸ್ಥಳದಲ್ಲಿ ಅನುಚಿತವಾಗಿ ವರ್ತಿಸಿ ತಮ್ಮ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 256 ಪೊಸಿಅ 2006 ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಲ್.ರಾಮನಾಯಕ್, ಸಿಹೆಚ್‌ಸಿ-226, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-11-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1272

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಕರ್ನಾಟಕ ನಾಗರೀಕ ಸೇವಾ ನಿಯಮ 285 (4) ರಡಿಯಲ್ಲಿ ಸರ್ಕಾರಿ ನೌಕರರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನಿವೃತ್ತಿ ಗೊಳಿಸುವ ಬಗ್ಗೆ.

ಓದಲಾಗಿದೆ: ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಸಿಬ್ಬಂದಿ-6/48/2005-06, ದಿನಾಂಕ:26/30-06-2006.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ:26/30-06-2006ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಆಡಳಿತ ಯಂತ್ರವನ್ನು ಹೆಚ್ಚು ಚುರುಕುಗೊಳಿಸಲು ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ಸಾರ್ವಜನಿಕ ಹಿತಾಸಕ್ತಿಗೆ ಉಪಯುಕ್ತ

ವಾಗುವಂತಹ ಹಂತವನ್ನು ಮೀರಿರುವ ಗ್ರೂಪ್ `ಸಿ` ಮತ್ತು ಗ್ರೂಪ್-ಡಿ ವೃಂದದ ಸರ್ಕಾರಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285 (4)ರಡಿಯಲ್ಲಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ವಲಯ ಮಟ್ಟದ ಉಪ ಸಮಿತಿಗಳನ್ನು ರಚಿಸಿದ್ದು, ಸದರಿ ಉಪ ಸಮಿತಿಗಳಲ್ಲಿ ಶಿಫಾರಸ್ಸು ಮಾಡಿರುವ ಈ ಕೆಳಕಂಡ ಸಿಬ್ಬಂದಿಗಳನ್ನು ಕಡ್ಡಾಯ ನಿವೃತ್ತಿಗೊಳಿಸಲು ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹೆಸರು ಹುದ್ದೆ ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|
| 01 | ಶ್ರೀ ಟಿ.ಸಿ.ಜಯರಾಂ, ಪಿಸಿ-123 ಡಿಎಆರ್ ಕೆ.ಜಿ.ಎಫ್. |
| 02 | ಶ್ರೀ ಗಜಾನನ ಸಾವಂತ ಸಿಪಿಸಿ-372 ಹಳಿಯಾಳ ಠಾಣೆ, ಕಾರವಾರ |
| 03 | ಶ್ರೀಕಾಂತರಾಯ ಪೆಡ್ನೇಕರ್, ಸಿಪಿಸಿ-1116, ಅಂಬಿಕಾನಗರ ಠಾಣೆ, ಕಾರವಾರ, ಉತ್ತರ ಕನ್ನಡ ಜಿಲ್ಲೆ. |
| 04 | ಶ್ರೀ ಚಿತ್ರಶೇಖರ, ಎಪಿಸಿ-447 ಡಿಎಆರ್ ಗುಲ್ಬರ್ಗಾ ಜಿಲ್ಲೆ. |
| 05 | ಶ್ರೀ ಮಾಧವರಾವ್, ಎಪಿಸಿ-190, ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 06 | ಶ್ರೀ ಜಫರುಲ್ಲಾ, ಎಪಿಸಿ-159 ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 07 | ಶ್ರೀ ಪ್ರಕಾಶ್, ಎಪಿಸಿ-256 ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 08 | ಶ್ರೀ ಶೇಖರಪ್ಪ, ಎ.ಎಸ್.ಐ., ಕುಷ್ಟಗಿ ಠಾಣೆ, ಕೊಪ್ಪಳ ಜಿಲ್ಲೆ |
| 09 | ಶ್ರೀ ಬಿ.ಪಿ.ಕಿತ್ತಳ್ಳಿ, ಪಿಎಸ್ಐ ಬಿಜಾಪುರ ಜಿಲ್ಲೆ |
| 10 | ಶ್ರೀ ಎನ್.ಎಸ್.ಶಿರೋಳ, ಪಿ.ಐ. ಡಿಸಿಐಬಿ ಗದಗ ಜಿಲ್ಲೆ |
| 11 | ಶ್ರೀ ಎಂ.ಸಿದ್ಧರಾಜು, ಸಿಹೆಚ್‌ಸಿ-375 ಗದಗ ಜಿಲ್ಲೆ |
| 12 | ಶ್ರೀ ಆರ್.ವೈ.ಪೂಜಾರಿ, ಸಿಹೆಚ್‌ಸಿ-1044 ಬೆಳಗಾವಿ ಜಿಲ್ಲೆ |
| 13 | ಶ್ರೀ ಆರ್.ಬಿ.ಕುಲಕರ್ಣಿ, ಪ್ರಥಮ ದರ್ಜೆ ಸಹಾಯಕ ಬಾಗಲಕೋಟೆ ಜಿಲ್ಲೆ |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 268 ಪೊಸಿಅ 2006 ಬೆಂಗಳೂರು, ದಿನಾಂಕ:21ನೇ ಆಗಸ್ಟ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಹದಿಮೂರು (13) ನೌಕರರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 285 (4) (ಬಿ) ರಡಿಯಲ್ಲಿ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ.

| ಕ್ರ.ಸಂ | ಹೆಸರು, ಹುದ್ದೆ ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|
| 01 | ಶ್ರೀ ಟಿ.ಸಿ.ಜಯರಾಂ, ಪಿಸಿ-123, ಡಿಎಆರ್ ಕೆ.ಜಿ.ಎಫ್ |
| 02 | ಶ್ರೀ ಗಜಾನನ ಸಾವಂತ, ಸಿಪಿಸಿ-372 ಹಳಿಯಾಳ ಠಾಣೆ, ಕಾರವಾರ |
| 03 | ಶ್ರೀಕಾಂತರಾಯ ಪೆಡ್ನೇಕರ, ಸಿಪಿಸಿ-1116, ಅಂಬಿಕಾನಗರ ಠಾಣೆ, ಕಾರವಾರ, ಉತ್ತರ ಕನ್ನಡ ಜಿಲ್ಲೆ, |
| 04 | ಶ್ರೀ ಚಿತ್ರಶೇಖರ, ಎಪಿಸಿ-447 ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 05 | ಶ್ರೀ ಮಾಧವರಾವ್, ಎಪಿಸಿ-190, ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 06 | ಶ್ರೀ ಜಫರುಲ್ಲಾ, ಎಪಿಸಿ-159 ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 07 | ಶ್ರೀ ಪ್ರಕಾಶ್, ಎಪಿಸಿ-256 ಡಿಎಆರ್ ಗುಲ್ಬರ್ಗಾ ಜಿಲ್ಲೆ |
| 08 | ಶ್ರೀ ಶೇಖರಪ್ಪ, ಎ.ಎಸ್.ಐ, ಕುಷ್ಠಗಿ ಠಾಣೆ, ಕೊಪ್ಪಳ ಜಿಲ್ಲೆ |
| 09 | ಶ್ರೀ ಬಿ.ಪಿ.ಕಿತ್ನಳ್ಳಿ, ಪಿಎಸ್ಐ ಬಿಜಾಪುರ ಜಿಲ್ಲೆ |
| 10 | ಶ್ರೀ ಎನ್.ಎಸ್.ಶಿರೋಳ, ಪಿ.ಐ. ಡಿಸಿಐಬಿ ಗದಗ ಜಿಲ್ಲೆ |
| 11 | ಶ್ರೀ ಎಂ.ಸಿದ್ಧರಾಜು, ಸಿಹೆಚ್‌ಸಿ-375 ಗದಗ ಜಿಲ್ಲೆ |
| 12 | ಶ್ರೀ ಆರ್.ವೈ.ಪೂಜಾರಿ, ಸಿಹೆಚ್‌ಸಿ-1044 ಬೆಳಗಾವಿ ಜಿಲ್ಲೆ |
| 13 | ಶ್ರೀ ಆರ್.ಬಿ.ಕುಲಕರ್ಣಿ, ಪ್ರಥಮ ದರ್ಜೆ ಸಹಾಯಕ ಬಾಗಲಕೋಟೆ ಜಿಲ್ಲೆ |

ಮುಂದುವರೆದು, ಇ ವರಿಗೆ ಕೂಡಲೇ ನಿವೃತ್ತಿಗೊಳ್ಳಲು ಆದೇಶಿಸಿರುವ ಕಾರಣ, ಅಂಥ ನಿವೃತ್ತಿಯ ದಿನಾಂಕದಿಂದ 3 ತಿಂಗಳ ಅವಧಿಯವರೆಗೆ ನಿವೃತ್ತಿ ವೇತನಕ್ಕೆ ಬದಲಾಗಿ, ಪ್ರತಿ ತಿಂಗಳೂ, ನಿವೃತ್ತಿಯಾದ ದಿನಾಂಕದ ನಿಕಟ ಪೂರ್ವದಲ್ಲಿ ಪಡೆಯುತ್ತಿದ್ದ ವೇತನಕ್ಕೆ ಸಮನಾದ ಮೊತ್ತವನ್ನು ಪಡೆಯಲು ಅನುಮತಿ ನೀಡಲಾಗಿದೆ. ಸದರಿ ಅವಧಿಯಲ್ಲಿ ಇ ವರಿಗೆ ದೊರಕುವ ಯಾವುದೇ ವೇತನ ಬಡ್ತಿಯನ್ನು ಇ ವರಿಗೆ ಸಂದಾಯ ಮಾಡಲು ಹಾಗೂ ಇ ವರು ಅಂತಹ ವೇತನವನ್ನು ಪಡೆಯುತ್ತಿರುವ ವರೆಗಿನ ಸದರಿ ಅವಧಿಯನ್ನು ಕರ್ತವ್ಯವನ್ನಾಗಿ ಪರಿಗಣಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇ ಲಾಖೆಯ ಆದೇಶ ಸಂಖ್ಯೆ:ಆಇ 1 ಟಿಎಫ್‌ಪಿ 96, ದಿನಾಂಕ:10-07-1996 ರಲ್ಲಿನ ಆರ್ಥಿಕ ಇ ಲಾಖೆಯ ಅನುಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್.ಎ. ಕುಲಕರ್ಣಿ

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1310

ವಿಷಯ: ದಿವಂಗತ ಮಲ್ಲಿಕಾರ್ಜುನ, ಸಿಪಿಸಿ ರವರ ಕುಟುಂಬಕ್ಕೆ ಅನುಗ್ರಹ ಪೂರ್ವಕ ಮೊತ್ತ ರೂ.5,00,000/- ಗಳನ್ನು ಮಂಜೂರು ಮಾಡುವ ಬಗ್ಗೆ.

ಓದಲಾಗಿದೆ: ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ವಿವೇಶಾ(1)2:04-05, ದಿನಾಂಕ: 16-10-2004, 21-03-2005 ಮತ್ತು 25-01-2006.

ಪ್ರಸ್ತಾವನೆ:

ಮೇಲೆ ಓದಲಾದ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರದಲ್ಲಿ ವಿವರಿಸಿರುವಂತೆ ಶ್ರೀ ಮಲ್ಲಿಕಾರ್ಜುನ ಬಸವಕಲ್ಯಾಣ ನಗರ ಠಾಣೆ, ಮತ್ತು ಶ್ಯಾಮರಾವ್ ಸಿಪಿಸಿ-1395 ಬಸವಕಲ್ಯಾಣ ನಗರ ಠಾಣೆ ರವರುಗಳನ್ನು ದಿನಾಂಕ: 07/08-08-2003ರ ರಾತ್ರಿ ಗಸ್ತು ಕರ್ತವ್ಯ ನಿರ್ವಹಿಸುತ್ತಿದ್ದಾಗ ಜೀಪ್ ಸಂಖ್ಯೆ:ಎಂಹೆಚ್:25/1828 ನೇದ್ದರ ಚಾಲಕ ಸುಭಾಷ ರವರು ಜೀಪನ್ನು ಅತೀ ವೇಗ ಹಾಗೂ ನಿಷ್ಕಾಳಜಿತನದಿಂದ ಚಲಾಯಿಸಿ ಸಿಪಿಸಿ-1084 ಮಲ್ಲಿಕಾರ್ಜುನ ರವರಿಗೆ ಡಿಕ್ಕಿ ಹೊಡೆದ ಪರಿಣಾಮ ಸದರಿಯವರು ಸ್ಥಳದಲ್ಲಿಯೇ ಮೃತಪಟ್ಟಿರುತ್ತಾರೆ. ಈ ಸಂಬಂಧದಲ್ಲಿ ಬಸವಕಲ್ಯಾಣ ಸಂಚಾರಿ ಠಾಣೆ ಗುನ್ನೆ ಸಂಖ್ಯೆ:110/2003, ಕಲಂ 279, 337, 338, 304 (ಎ) ಐಪಿಸಿ 187 ಐಎಂವಿ ಆಕ್ಟ ಪ್ರಕಾರ ಪ್ರಕರಣ ದಾಖಲಾಗಿರುತ್ತದೆ. ಆದುದರಿಂದ ದಿವಂಗತ ಮಲ್ಲಿಕಾರ್ಜುನ ಸಿಪಿಸಿ ರವರ ಪತ್ನಿ ಶ್ರೀಮತಿ ರಾಜಶ್ರೀ ರವರು ಅರ್ಜಿ ಸಲ್ಲಿಸಿ ಸರ್ಕಾರಿ ಆದೇಶ ಸಂಖ್ಯೆ:ಒಸಾಇ 353 ಪೊಸಿಇ 2001, ದಿನಾಂಕ:05-08-2003ರ ರೀತ್ಯ ರೂ.5,00,000/-ಗಳ ಅನುಗ್ರಹ ಪೂರಕ ಮೊತ್ತವನ್ನು ಮಂಜೂರು ಮಾಡುವಂತೆ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಒಸಾಇ 164 ಪೊಪೆಸೆ 2004, ದಿನಾಂಕ:02-11-2004ರಲ್ಲಿ ಏಕಗಂಟಿನ ಪರಿಹಾರ ಧನ ರೂ.73458-00 ಗಳನ್ನು ಮಂಜೂರು ಮಾಡಿರುವುದರಿಂದ ಅದನ್ನು ಕಡಿತಗೊಳಿಸಿ ಉಳಿದಂತೆ ರೂ.426542-00 ಗಳ ಅನುಗ್ರಹ ಪೂರಕ ಮೊತ್ತವನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

ಸರ್ಕಾರದ ಆದೇಶ ಸಂಖ್ಯೆ:ಒಇ 255 ಪೊಸಿಇ 2005 ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2006

ದಿವಂಗತ ಮಲ್ಲಿಕಾರ್ಜುನ ಸಿಪಿಸಿ ರವರು ಕರ್ತವ್ಯದಲ್ಲಿರುವಾಗ ಮರಣ ಹೊಂದಿದ ಪ್ರಯುಕ್ತ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ದಿವಂಗತರ ಕುಟುಂಬಕ್ಕೆ ರೂ.4,26,542-00 (ನಾಲ್ಕು ಲಕ್ಷದ ಇಪ್ಪತಾರು ಸಾವಿರದ ಐದು ನೂರಾ ನಲ್ವತ್ತೆರಡು) (ಸಮೂಹ ವಿಮಾ ಯೋಜನೆಯ ಸೌಲಭ್ಯವು ಸೇರಿದಂತೆ)ಗಳನ್ನು ಅನುಗ್ರಹ ಪೂರ್ವಕ ಪರಿಹಾರ ಧನವನ್ನಾಗಿ ಮಂಜೂರು ಮಾಡಿ ಆದೇಶಿಸಿದೆ.

ಈ ಪರಿಹಾರ ಮೊತ್ತವನ್ನು ಪೊಲೀಸ್ ಇಲಾಖೆಯ ಲೆಕ್ಕ ಶೀರ್ಷಿಕೆ:2055-00-109-1-01-051, ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಒಸಾಇ :31391:ಆಂಆಸ:2006, ದಿನಾಂಕ:26-07-2006 ರಲ್ಲಿನ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎ. ಕುಲಕರ್ಣಿ

ಪಿ.ಆರ್. 1288 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** 2006 ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ಕಾರ್ಯಕ್ರಮಕ್ಕೆ ಆರ್ಥಿಕ ನೆರವು ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ಟೀಮರ 2006, ದಿನಾಂಕ: 7.4.2006.
2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ರವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:1: 27:2006-07, ದಿನಾಂಕ: 3.7.2006.

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ 2006-07ನೇ ಸಾಲಿನ ಯೋಜನಾ ಕಾರ್ಯಕ್ರಮಗಳಲ್ಲಿ ಪರಂಪರೆ ಉಳಿಸಿ ಸಪ್ತಾಹದ ಆಚರಣೆಗಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 7.4.2006 ರ ಸರ್ಕಾರಿ ಆದೇಶದಲ್ಲಿ ರೂ.75,000-00 ಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 3.7.2006ರ ತಮ್ಮ ಪತ್ರದಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿಯು ಒಂದು ವಾರ ಕಾಲ ರಾಜ್ಯಾದಾದ್ಯಂತ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಇದಕ್ಕಾಗಿ ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು ಇವರಿಗೆ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ಆಚರಣೆಗೆ ರೂ.45,000-00 ಗಳನ್ನು ಹಾಗೂ ಇತಿಹಾಸ ದರ್ಶನ ಸಂಚಿಕೆ ಹೊರತರಲು ರೂ.30,000-00 ಗಳನ್ನು ಒಟ್ಟು ರೂ.75,000-00 ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 147 ಕೆಎಂಯು 2006, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2006**

ಕರ್ನಾಟಕ ಇತಿಹಾಸ ಅಕಾಡೆಮಿಯು ಹಮ್ಮಿಕೊಂಡಿರುವ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ಆಚರಣೆಗಾಗಿ ಒಟ್ಟು ರೂ.75,000-00 (ಎಪ್ಪತ್ತೈದು ಸಾವಿರ ರೂ.ಗಳು) ಗಳನ್ನು ಸದರಿ ಅಕಾಡೆಮಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಸದರಿ ಮೊತ್ತವನ್ನು ವೆಚ್ಚದ ವಿವರವಾದ ಅಂತಿಮ ಪಟ್ಟಿ ಪಡೆಯುವ ನಿಬಂಧನೆಗಳಿಗೆ ಒಳಪಟ್ಟು ಪೇಯೀಸ್ ರಸೀಟ್ ಮೂಲಕ ಬಿಡುಗಡೆ ಮಾಡತಕ್ಕದ್ದು. ಈ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-103-0-01-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. ಆಂತರೀಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಟಿಪ್ಪಣಿ ಸಂಖ್ಯೆ: ಇಡಿ 647 ಐಎಫ್(ಬಿಎ) 2006 ದಿನಾಂಕ: 11.8.2006 ರಲ್ಲಿ ನೀಡಿರುವ ಸಹಮತಿಯನ್ನು ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**

ಪಿ.ಆರ್. 1305 ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).